

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1718 (2053)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : ಅಕ್ರಮವಾಗಿ ನೋಂದಾವಣಿ ಮಾಡಿರುವ ಬಗ್ಗೆ

(ಅ) ದೊಡ್ಡಬಳ್ಳಾಪುರ ತಾಲ್ಲೂಕು ಕಸಬಾ ಹೋಬಳಿ ತಿಮ್ಮಸಂದ್ರ ಗ್ರಾಮಕ್ಕೆ ಸೇರಿದ್ದ ಸರ್ವೆ ನಂ.46ರಲ್ಲಿ ಮೂರು ಎಕರೆ 18 ಗುಂಟೆ ಹಾಗೂ ಸರ್ವೆ ನಂಬರ್ 47 ಎರಡು ಎಕರೆ 14 ಗುಂಟೆ ಜಮೀನಿಗೆ ಸಂಬಂಧಿಸಿದಂತೆ 2001 ನೇ ಸಾಲಿನ ಅವಧಿಯಲ್ಲಿ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ ರಾಜಘಾಟ್ ಶಾಖೆ, ಇಲ್ಲಿ ಅಡಮಾನ ಕೃಷಿ (ದ್ರಾಕ್ಷಿ) ಸಾಲ ಪಡೆದಿರುವುದು ನಿಜವೇ ;

(ಆ) ಹಾಗಿದ್ದಲ್ಲಿ, ಸದರಿ ಜಮೀನನ್ನು ಸಾಲ ನೀಡಿದ ಬ್ಯಾಂಕಿನ ಹೆಸರಿಗೆ ನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿ ಮಾಡಿದ್ದಾರೆಯೇ; ಮಾಡಿದ್ದಲ್ಲಿ, ಯಾವ ದಿನಾಂಕದಂದು ನೋಂದಣಿಯಾಗಿದೆ ; (ವಿವರ ಒದಗಿಸುವುದು)

(ಇ) ಸದರಿ ಸ್ವತ್ತು ಬ್ಯಾಂಕಿನ ಹೆಸರಿಗೆ ಅಡಮಾನ ನೋಂದಣಿಯಾಗಿದ್ದರು ಸಹ ದೊಡ್ಡಬಳ್ಳಾಪುರ ಉಪನೋಂದಣಾಧಿಕಾರಿ ಅವರ ಕಛೇರಿಯಲ್ಲಿ ಬೇರೆ ಬೇರೆಯವರ ಹೆಸರಿಗೆ ಕ್ರಯ ನೋಂದಣಿ ಮಾಡಿದ್ದು, ನಿಜವೇ ; ಹಾಗಿದ್ದಲ್ಲಿ, ಸದರಿ ನೋಂದಣಿ ಪ್ರಕ್ರಿಯೆ ಕಾನೂನುಬಾಹಿರ ಅಲ್ಲವೇ ;

(ಈ) ಕಾನೂನುಬಾಹಿರ ಕ್ರಯಮಾಡಿರುವುದಕ್ಕೆ ದಿನಾಂಕ:19.1.2005 ರಂದು ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ, ರಾಜಘಾಟ್ ಶಾಖೆಯವರ ಆಕ್ಷೇಪಣೆ ವ್ಯಕ್ತಪಡಿಸಿ ಉಪ ನೋಂದಣಾಧಿಕಾರಿ, ದೊಡ್ಡಬಳ್ಳಾಪುರ ಇವರಿಗೆ ಪತ್ರ ಬರೆದಿರುವುದು ನಿಜವೇ ; (ಪತ್ರದ ಪ್ರತಿಯನ್ನು ಒದಗಿಸುವುದು)

(ಉ) ಕಾನೂನುಬಾಹಿರವಾಗಿ ಕ್ರಯ ನೋಂದಣಿಯಾದ ಸದರಿ ಸ್ವತ್ತಿನ ನೋಂದಣಿ ಪ್ರಕ್ರಿಯೆಯನ್ನು ರದ್ದುಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ; ಯಾವ ಕಾಲಮಿತಿಯೊಳಗಡೆ ಕ್ರಮ ಜರುಗಿಸಲಾಗುವುದು ?